

ಕರ್ನಾಟಕ

# ಸ್ಕೌಟ್ ಶತಮಾನೋತ್ಸವ - 2007




# ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

News Magazine

VOL. - 7 JUNE - 2007 No. - 5








Sri T.N. Chaturvedi, H.E. the Governor of Karnataka & Patron, BS&G, Karnataka, Sri Rameshwar Thakur, H.E. the Governor of Orissa & A.P. and President, BS&G, India, Sri Dharam Singh, Former Chief Minister, Karnataka & President BS&G, Karnataka, Sri Alkod Hanumanthappa, Hon'ble Minister for Youth Services & Sports (GOK), Sri P.G.R. Sindhia, Former Finance Minister (GOK) & Vice Prsident BS&G and Sri Kondajji B. Shanmukhappa, State Chief Commissioner are seen at a Function held at Raj Bhavan on 12th June 2007.





Sri Dharam Singh, Former Chief Minister Karnataka, presenting a Memento to Sri T.N. Chaturvedi, H.E., the Governor of Karnataka and Sri Rameshwar Thakur, H.E. the Governor of Orissa & Andhra Pradesh at Raj Bhavan on 12 June 2007 on behalf of The Bharat Scouts & Guides, Karnataka.



Sri T.N. Chaturvedi, H.E. the Governor of Karnataka having a word with Sri Rameshwar Thakur, H.E. the Governor of Orissa & A.P. Sri Alkod Hanumanthappa, Hon'ble Minister for Youth Services & Sports, Govt. of Karnataka, are also seen.




Sri Kondajji B Shanmukappa, SCC, Flagging off the Route March on the occassion of The World Environment Day on 05-06-2007 in front of Vidhan Soudha, Bangalore.




Sri G. Kumar Naik, IAS, Commissoner of Tourism speaking on the occassion of the World Environment Day






Scouts & Guides on the Route March on the occassion of The World Environment Day.




Vol - 7 | June - 2007 | No. 5



## ಪರಿವಿಡಿ

1. ರಾಜ್ಯ ಮುಖ್ಯ ಆಯುಕ್ತರ ನುಡಿ — 2
2. ಬೆಂಗಳೂರು ರಾಜಭವನದಲ್ಲಿ ರಾಜ್ಯಪಾಲರುಗಳ ಭೇಟಿ — 5
3. ವಿಶ್ವ ಪರಿಸರ ದಿನ — 7
4. ರಾಷ್ಟ್ರಪತಿ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಭಾವಿ ತರಬೇತಿ ಶಿಬಿರ — 8
5. *100 Years of Scouting 100 years of management* — 9
6. *Events to mark the Centemary Celebrations* — 12
7. *Congratulations....* — 13
8. *Preparations for the Rashtrapatis Scout & Guides / Rovers & Rangers* — 14
9. ಜಿಲ್ಲಾ ವಾರ್ತೆ — 16

# ರಾಜ್ಯ ಮುಖ್ಯ ಆಯುಕ್ತರ ನುಡಿ.............................

*ಮಾನ್ಯರೆ,*

ಜೂನ್ 5 ರಂದು "ವಿಶ್ವ ಪರಿಸರ ದಿನ"ವನ್ನು ರಾಜ್ಯ ಸಂಸ್ಥೆಯು ವಿಧಾನಸೌಧದ ಮುಂಭಾಗದಿಂದ ಪ್ರಾರಂಭವಾದ ಸ್ಕೌಟ್ಸ್-ಗೈಡ್ಸ್‌ಗಳ ಪಥಚಲನದೊಂದಿಗೆ ಆರಂಭಿಸಿ, ಕಬ್ಬನ್ ಉದ್ಯಾನವನದ ಜವಾಹರ್ ಬಾಲಭವನದಲ್ಲಿ ಏರ್ಪಡಿಸಿದ ಚಿತ್ರ ರಚನಾಸ್ಪರ್ಧೆ ಪ್ರಬಂಧ ಹಾಗು ಭಾಷಣ ಸ್ಪರ್ಧೆಗಳೊಂದಿಗೆ ಅತ್ಯಂತ ಯಶಸ್ಸಿಯಾಗಿ ಆಚರಿಸಲಾಯ್ತು. 400ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ರಾಜ್ಯದ ಪ್ರವಾಸೋದ್ಯಮ ಇಲಾಖೆಯ ಆಯುಕ್ತರೂ ಹಾಗೂ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಆಯುಕ್ತರೂ ಆದ ಶ್ರೀ ಜಿ. ಕುಮಾರನಾಯ್ಕರವರು "ವಿಶ್ವ ಪರಿಸರ ದಿನ" ಉದ್ಘಾಟಿಸಿ ಸ್ಕೌಟ್ಸ್-ಗೈಡ್ಸ್ ಚಳವಳಿ ಪರಿಸರ ಕಾಪಾಡುವಲ್ಲಿ ಹೆಚ್ಚಿನ ಪಾತ್ರ ವಹಿಸಬೇಕೆಂದು ಕರೆ ನೀಡಿದರು. ವಿದ್ಯಾರ್ಥಿಗಳಿಗೆ ಪರಿಸರ ಸಂರಕ್ಷಣೆ, ಗಿಡಗಳ ನೆಡುವುದು ಹಾಗು ಅವುಗಳ ಪೋಷಣೆ ಬಗ್ಗೆ ತರಬೇತಿ ಶಿಬಿರಗಳಲ್ಲಿ ಮಾರ್ಗದರ್ಶನ ಮಾಡಿ ಪರಿಸರ ಸಂರಕ್ಷಣೆಗೆ ಹೆಚ್ಚು ಒತ್ತು ನೀಡುವುದು ಅವಶ್ಯಕ ಎಂದರು.

ರಾಜ್ಯದ ಹೆಸರಾಂತ ಪರಿಸರ ತಜ್ಞರೂ ಹಾಗೂ ರಾಜ್ಯ ಕಾರ್ಯದರ್ಶಿಯಾದ ಶ್ರೀ ಸುರೇಶ್ ಹೆಬ್ಳೀಕರ್‌ರವರು ಸಮಾರಂಭದಲ್ಲಿ ವಿಶೇಷ ಅತಿಥಿಯಾಗಿ ಭಾಗವಹಿಸಿ ಪ್ರತಿ ಸ್ಕೌಟ್-ಗೈಟ್ ತನ್ನ ಆವರಣದಲ್ಲಿ ಒಂದು ಸಸಿ ಬೆಳಸಿ - ಸ್ಕೌಟ್ ಶತಮಾನೋತ್ಸವ ವರ್ಷದಲ್ಲಿ 2.50 ಲಕ್ಷ ಗಿಡಗಳನ್ನು ನೆಡಬೇಕೆಂದು ಕರೆ ಇತ್ತರು.

ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ಎಂ.ಜಿ. ಬೋಪಯ್ಯ ಅವರು ಪರಿಸರ ಕಾಪಾಡುವಲ್ಲಿ ಸ್ಕೌಟ್-ಗೈಡ್‌ಗಳ ಪಾತ್ರ ಹಿಂದಿಗಿಂತಲೂ ಇಂದು ಹೆಚ್ಚು ಅವಶ್ಯವೆಂದರು.

**ಬೆಂಗಳೂರಿನ ರಾಜಭವನದಲ್ಲಿ ಒರಿಸ್ಸಾ ಹಾಗೂ ಆಂಧ್ರಪ್ರದೇಶ ಹಾಗೂ ಕರ್ನಾಟಕದ ರಾಜ್ಯಪಾಲರುಗಳಿಗೆ ಅಭಿನಂದನಾ ಸಮಾರಂಭ** : ದಿನಾಂಕ 12-06-2007 ರಂದು ರಾಜ್ಯ ಸಂಸ್ಥೆಯು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಅಧ್ಯಕ್ಷರೂ ಹಾಗೂ ಒರಿಸ್ಸಾ ಹಾಗೂ ಆಂಧ್ರಪ್ರದೇಶಗಳ ಗೌರವಾನ್ವಿತ ರಾಜ್ಯಪಾಲರಾದ ಶ್ರೀರಾಮೇಶ್ವರ್ ಠಾಕೂರ್ ಹಾಗೂ ಕರ್ನಾಟಕದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪೋಷಕರೂ ಹಾಗೂ ಗೌರವಾನ್ವಿತ ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿ ಅವರುಗಳನ್ನು ರಾಜಭವನದ ಬ್ಯಾಂಕ್ವೆಟ್ ಸಭಾಂಗಣದಲ್ಲಿ ಅಭಿನಂದಿಸಲಾಯಿತು. ರಾಜ್ಯ ಸಂಸ್ಥೆಯ ಅಧ್ಯಕ್ಷರೂ ಹಾಗೂ

ಮಾಜಿಮುಖ್ಯ ಮಂತ್ರಿಗಳಾದ ಶ್ರೀ ಎನ್. ಧರ್ಮಸಿಂಗ್, ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ ಸಚಿವರಾದ ಸನ್ಮಾನ್ಯ ಶ್ರೀ ಆಲ್ಕೋಡ್ ಹನುಮಂತಪ್ಪ ಹಾಗೂ ಮಾಜಿ ಸಚಿವರೂ, ಸಂಸ್ಥೆಯ ಉಪಾಧ್ಯಕ್ಷರೂ ಹಾಗೂ ಮಾನ್ಯ ಶಾಸಕರಾದ ಶ್ರೀ ಪಿ.ಜಿ.ಆರ್. ಸಿಂಧಿಯಾ, ರಾಜ್ಯ ಕೋಶಾಧಿಕಾರಿ ಶ್ರೀ ಟಿ. ಪ್ರಭಾಕರ್ ಹಾಗೂ ಸಂಸ್ಥೆಯ ವಿವಿಧ ಹಂತದ ಪದಾಧಿಕಾರಿಗಳು ಸಮಾರಂಭದಲ್ಲಿ ಭಾಗವಹಿಸಿದರು.

ಗೌರವಾನ್ವಿತ ರಾಜ್ಯಪಾಲರುಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ನೆನಪಿನ ಕಾಣಿಕೆ ಅರ್ಪಿಸಿ ಗೌರವ ಸಲ್ಲಿಸಲಾಯಿತು.

ಜುಲೈ 11, 2007 ರಂದು ರಾಷ್ಟ್ರಪತಿ ಭವನದ ಅಶೋಕ ಹಾಲ್‌ನಲ್ಲಿ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ ಹಾಗೂ ರಾಷ್ಟ್ರೀಯ ಪದಕ ಪ್ರಧಾನ ಸಮಾರಂಭ ಏರ್ಪಡಿಸಲಾಗಿದ್ದು ರಾಜ್ಯದ ಅನುಭವಿ ಹಿರಿಯ ಸ್ಕೌಟ್-ಗೈಡ್ ನಾಯಕ-ನಾಯಕಿಯರುಗಳಿಗೆ ಅತ್ಯುನ್ನತ ಸ್ಕೌಡ್-ಗೈಡ್ ಪ್ರಶಸ್ತಿಗಳನ್ನು ಗೌರವಾನ್ವಿತ ರಾಷ್ಟ್ರಪತಿಗಳು ನೀಡಲಿದ್ದಾರೆ. ರಾಜ್ಯ ಸಂಸ್ಥೆಯ ಪರವಾಗಿ ಪ್ರಶಸ್ತಿಗಳನ್ನು ಸ್ವೀಕರಿಸಲಿರುವ ಎಲ್ಲಾ ಸೋದರ-ಸೋದರಿಯರಿಗೆ ಹೃತ್ಪೂರ್ವಕ ಅಭಿನಂದನೆಗಳು.

**ವಿಶ್ವ ಸ್ಕೌಟ್ ಶತಮಾನೋತ್ಸವ ಆಚರಣೆ 2007 :** ಆಗಸ್ಟ್ 1, 2007 ರಂದು ಬೆಂಗಳೂರಿನಲ್ಲಿ ಸ್ಕೌಟ್ ಚಳವಳಿ ಶತಮಾನೋತ್ಸವ ಆಚರಣೆ ಕಾರ್ಯಕ್ರಮವನ್ನು ಕೆಂಪೇಗೌಡ ರಸ್ತೆಯಲ್ಲಿರುವ "ಶಿಕ್ಷಕರ ಸದನ"ದಲ್ಲಿ ಏರ್ಪಡಿಸಲು ಸಿದ್ಧತೆಗಳನ್ನು ನಡೆಸಲಾಗಿದೆ.

ರಾಜ್ಯದ 5 ಭಾಗಗಳಿಂದ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸ್ವಯಂ ಸೇವಕರುಗಳನ್ನು ಒಳಗೊಂಡ "ವಿಶ್ವ ಶಾಂತಿ ಜಾಥಾ" ನಡೆಸಲು ಏರ್ಪಾಡಾಗಿದ್ದು, ಅವರೆಲ್ಲರೂ ವಿವಿಧ ಜಿಲ್ಲೆಗಳಿಂದ ಸ್ಕೌಟ್-ಗೈಡ್ ಚಳವಳಿಯ ಚಿಂತನೆ, ತತ್ವಗಳು ಭೋದನೆಗಳನ್ನೊಳಗೊಂಡ ಬ್ಯಾನರ್ ಹಾಗೂ ಫಲಕಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳ ಮುಖೇನ ಬೆಂಗಳೂರಿನ "ಶಿಕ್ಷಕರ ಸದನ" ತಲುಪಲು ಸೂಚಿಸಲಾಗಿದೆ.

ಈ ಸಂಚಿಕೆಯಲ್ಲಿ ಶತಮಾನೋತ್ಸವ ಆಚರಣೆಯ ಗುರಿ ಹಾಗು ಉದ್ದೇಶಗಳನ್ನು ಅಲ್ಲದೆ ರಾಜ್ಯ ಸಂಸ್ಥೆಯು, ಹಮ್ಮಿಕೊಂಡಿರುವ ವಿವಿಧ ಶತಮಾನೋತ್ಸವ ಚಟುವಟಿಕೆಗಳ ವಿವರಗಳನ್ನು ಪ್ರಕಟಿಸಲಾಗಿದೆ.

ಉತ್ಸವದ ಸಂದರ್ಭದಲ್ಲಿ ವಿಶೇಷ ಸ್ಮರಣೆ ಸಂಚಿಕೆ ಹೊರತರಲು ತಯಾರಿ ನಡೆದಿದೆ. ಹಿರಿಯ ಅನುಭವಿ ನಾಯಕರುಗಳಿಂದ ಚಳವಳಿಯ ಬಗ್ಗೆ ಸೂಕ್ತ ಲೇಖನಗಳನ್ನು ಪಡೆಯಲು ಪತ್ರ ಬರೆಯಲಾಗಿದ್ದು

ಜಾಹಿರಾತು ಹಾಗೂ ಹಣಕಾಸಿನ ನೆರವನ್ನೂ, ಕೂಡ ಸಂಘ-ಸಂಸ್ಥೆಗಳಿಂದ, ಬ್ಯಾಂಕಿಂಗ್ ಹಾಗೂ ವಿವಿಧ ಉದ್ಯಮಗಳ - ಸರ್ಕಾರಿ ಹಾಗೂ ಸರ್ಕಾರೇತರ ಕಾರ್ಖಾನೆಗಳ ಮೂಲಕ ಸಂಗ್ರಹಿಸುವ ಗುರಿಹೊಂದಲಾಗಿದೆ.

ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವಯಂ ಸೇವಕರುಗಳಲ್ಲಿ - ಕಾರ್ಯಕರ್ತರುಗಳಲ್ಲಿ ಪೋಷಕರುಗಳು - ಸಂಸ್ಥೆಯ ಅಭಿಮಾನಿಗಳಲ್ಲಿ ನನ್ನ ಮನವಿ. ದಯಮಾಡಿ ತಾವು ಸಂಸ್ಥೆಯ ಯೋಜಿತ ಸ್ಮರಣಾ ಸಂಚಿಕೆ ಹಾಗೂ ಯಾವುದಾದರೂ ಒಂದು ಸಂಚಿಕೆಗೆ ಸೂಕ್ತ ಮೊತ್ತದ ಜಾಹಿರಾತು ಅಥವಾ ಪ್ರಕಟಿತ ಕಾರ್ಯಕ್ರಮಗಳಿಗೆ ಹಣಕಾಸಿನ ಸಹಾಯ ನೀಡಿ ಸ್ಕೌಟ್-ಗೈಡ್ ಚಳವಳಿ ರಾಜ್ಯದಲ್ಲೆಡೆ ಹಬ್ಬಲು ನೆರವಾಗಬೇಕೆಂದು ಕೋರುತ್ತೇನೆ.

ಕರ್ನಾಟಕ ಸ್ಕೌಟ್-ಗೈಡ್ ಸಂಸ್ಥೆಗೆ ನೀಡುವ, ಎಲ್ಲಾ ದಾನಗಳಿಗೆ ಕೇಂದ್ರ ಆದಾಯ ತೆರಿಗೆ ಇಲಾಖೆಯು 80(ಜಿ) ಸೆಕ್ಷನ್ ಪ್ರಕಾರ ತೆರಿಗೆ ವಿನಾಯಿತಿ ನೀಡುರುತ್ತಾರೆ. ಜಿಲ್ಲಾ ಸಂಸ್ಥೆಗಳು, ಸಂಘ, ಸಂಸ್ಥೆಗಳು ತಮ್ಮ ವ್ಯಾಪ್ತಿಯಲ್ಲಿ ಸ್ಮರಣ ಸಂಚಿಕೆಗೆ ಜಾಹಿರಾತು ಹಾಗೂ ದಾನದ ರೂಪದಲ್ಲಿ ಹಣ ಚೆಕ್ - ಡಿ.ಡಿ. ಮೂಲಕ ಸಂಗ್ರಹಿಸಿ ರಾಜ್ಯಕಾರ್ಯಾಲಯಕ್ಕೆ ಕಳುಹಿಸಲು ಕೋರುತ್ತೇನೆ.

ಸ್ಥಳೀಯ ಹಾಗೂ ಜಿಲ್ಲಾ ಮಟ್ಟಗಳಲ್ಲಿಯೂ ಸ್ಕೌಟ್ ಶತಮಾನೋತ್ಸವದ ರ್‍ಯಾಲಿ ಕಾರ್ಯಕ್ರಮಗಳನ್ನು ಏರ್ಪಡಿಸಲು ತಾವುಗಳು ಈಗಾಗಲೇ ಕಾರ್ಯಪ್ರವೃತ್ತರಾಗಿರುವುದನ್ನು ಇತ್ತೀಚೆಗೆ ಕೇಂದ್ರ ಕಚೇರಿಯಲ್ಲಿ ಜರುಗಿದ ಸಂಘಟನಾಧಿಕಾರಿಗಳ ಸಭೆಯಲ್ಲಿ ತಿಳಿದು ಕೊಂಡಿದ್ದೇನೆ.

2007-2008 ವಿಶ್ವ ಸ್ಕೌಟ್ ಶತಮಾನೋತ್ಸವವನ್ನು ಅತ್ಯಂತ ಉತ್ಸಾಹ, ವಿಜೃಂಭಣೆಗಳಿಂದ ರಾಜ್ಯದೆಲ್ಲೆಡೆ ಏರ್ಪಡಿಸುವುದರೊಂದಿಗೆ, ಚಳವಳಿಯ ಬಗ್ಗೆ "ಜನಜಾಗೃತಿ" ಉ ಂಟು ಮಾಡುವಲ್ಲಿ ನಾವೆಲ್ಲಾ ಶ್ರಮಿಸೋಣ ಎಂದು ಆಶಿಸಿ ತಮಗೆಲ್ಲಾ ಶುಭ ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ




# ಬೆಂಗಳೂರು ರಾಜಭವನದಲ್ಲಿ ರಾಜ್ಯಪಾಲರುಗಳ ಭೇಟಿ

ಒರಿಸ್ಸಾ ಮತ್ತು ಆಂಧ್ರಪ್ರದೇಶದ ರಾಜ್ಯಪಾಲರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಸಂಸ್ಥೆಯ ಅಧ್ಯಕ್ಷರೂ ಆದ ಘನತೆವೆತ್ತ ಶ್ರೀ ರಾಮೇಶ್ವರ ಠಾಕೂರ್‌ರವರು ರಾಜ್ಯಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯ ಪರವಾಗಿ ಸನ್ಮಾನಿಸಲಾಯಿತು.

ಕರ್ನಾಟಕದ ರಾಜ್ಯಪಾಲರು ಹಾಗೂ ಕರ್ನಾಟಕ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯ ಪೋಷಕರೂ ಆದ ಘನತೆವೆತ್ತ ಶ್ರೀ ಟಿ.ಎನ್. ಚತುರ್ವೇದಿ ಅವರನ್ನು ಸಹ ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ದಿನಾಂಕ 12-06-2007 ರಂದು ಬೆಂಗಳೂರಿನ ರಾಜಭವನದಲ್ಲಿ ನಡೆದ ಸರಳ ಸಮಾರಂಭದಲ್ಲಿ ಮಾಜಿ ಮುಖ್ಯ ಮಂತ್ರಿಗಳು ಹಾಗೂ ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಎನ್. ಧರ್ಮಸಿಂಗ್‌ರವರು, ರಾಜ್ಯ ಸಂಸ್ಥೆಯ ಪರವಾಗಿ ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದರು.

ಕರ್ನಾಟಕ ಸರ್ಕಾರದ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಮಂತ್ರಿಗಳಾದ ಸನ್ಮಾನ್ಯ ಶ್ರೀ ಆಲ್ಕೋಡ್ ಹನುಮಂತಪ್ಪ, ಮಾಜಿ ಮಂತ್ರಿಗಳು ಹಾಗೂ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಉಪಾಧ್ಯಕ್ಷರೂ, ಮಾನ್ಯ ಶಾಸಕರೂ ಆದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಸನ್ಮಾನ ಸ್ವೀಕರಿಸಿ ಮಾತನಾಡಿದ ಶ್ರೀ ರಾಮೇಶ್ವರ ಠಾಕೂರ್‌ರವರು ದೊಡ್ಡಬಳ್ಳಾಪುರದ ಡಾ|| ಅನಿಬೆಸೆಂಟ್ ಪಾರ್ಕ್‌ಅನ್ನು ಎರಡನೇ ರಾಷ್ಟ್ರೀಯ ತರಬೇತಿ ಕೇಂದ್ರವನ್ನಾಗಿ ಅಭಿವೃದ್ಧಿ ಪಡಿಸಬೇಕೆಂದು ಸೂಚಿಸಿದರು. ಅವರು ತಮ್ಮ ಸ್ಕೌಟಿಂಗ್ ಜೀವನವನ್ನು ಮೆಲುಕು ಹಾಕಿದರು. ಕರ್ನಾಟಕ ಸರ್ಕಾರವು ಈ ಆಂದೋಲನಕ್ಕೆ ಹೆಚ್ಚಿನ ಸಹಕಾರ ನೀಡುವಂತೆ ಕೋರಿದರು. ಶ್ರೀ ಟಿ.ಎನ್. ಚತುರ್ವೇದಿಯವರು ಮಾತನಾಡುತ್ತಾ ಮಾನವ ಸಂಪನ್ಮೂಲ ಅಭಿವೃದ್ಧಿಗೆ ಈ ಚಳುವಳಿಯು ಉತ್ತಮ ಮಾರ್ಗ ಎಂದು ಬಣ್ಣಿಸಿದರು. ಇದಕ್ಕೆ ಎಲ್ಲಾ ರೀತಿಯ ಸಹಕಾರವನ್ನು ನೀಡುವಂತೆ ಸರ್ಕಾರಕ್ಕೆ ತಿಳಿಸುತ್ತೇವೆಂದು ನುಡಿದರು.

ಪ್ರಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಘನತೆವೆತ್ತ ರಾಜ್ಯಪಾಲರುಗಳನ್ನು ಸ್ವಾಗತಿಸುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮಗಳಿಗೆ ಕರ್ನಾಟಕ ಸರ್ಕಾರ ನೀಡಿರುವ ಹಲವು ವಿಧದ ನೆರವನ್ನು ಸ್ಮರಿಸಿದರು.

ಸಾರ್ವಜನಿಕ ಶಿಕ್ಷಣ ಇಲಾಖೆ ಪ್ರೌಢ ಶಿಕ್ಷಣ ನಿರ್ದೇಶಕರಾದ ಶ್ರೀ ಶಂಕ್ರಯ್ಯಸ್ವಾಮಿ ಚಿದ್ರೆಯವರು ಮತ್ತು ಪ್ರಾಥಮಿಕ ಶಿಕ್ಷಣದ ನಿರ್ದೇಶಕರಾದ ಶ್ರೀ ಜಿ. ಚಂದ್ರಶೇಖರ್‌ರವರು ಈ ಸಂದರ್ಭದಲ್ಲಿ

ಉಪಸ್ಥಿತರಿದ್ದರು. ರಾಜ್ಯಪಾಲರುಗಳ ಕಾರ್ಯದರ್ಶಿಗಳಾದ ಶ್ರೀ ಎಂ.ಜಿ. ಗೋಪಾಲ್ ಹಾಗೂ ಶ್ರೀಮತಿ ಶಾರದ ಸುಬ್ರಮಣ್ಯ ಸಂಸ್ಥೆಯ ಉಪಾಧ್ಯಕ್ಷರುಗಳಾದ ಶ್ರೀಮತಿ ಎಂ.ಜಿ. ಬೋಪಯ್ಯ, ಶ್ರೀಮತಿ ಜಯಮ್ಮ ಮಲ್ಲಿಕಾರ್ಜುನಸ್ವಾಮಿ ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಸ್ಕೌಟ್ ಶಿಕ್ಷಕ ಹಾಗೂ ಗೈಡ್ ಶಿಕ್ಷಕಿಯರು ಸ್ಕೌಟ್ ಗೈಡ್‌ಗಳು ಮತ್ತು ಪೋಷಕರು ಸಮಾರಂಭದಲ್ಲಿ ಹಾಜರಿದ್ದರು.

ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್ಸ್) ಶ್ರೀ ಎನ್. ಶ್ರೀನಿವಾಸನ್‌ರವರು ಎಲ್ಲರನ್ನೂ ವಂದಿಸಿದರು. ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ಮಿಸ್. ಪಿ. ಸರೋಜರವರು ಕಾರ್ಯಕ್ರಮವನ್ನು ನಿರೂಪಿಸಿದರು.

## ಸ್ಕೌಟು-ಗೈಡುಗಳು ನಾವು

*ಸ್ಕೌಟು, ಗೈಡುಗಳು ನಾವು,*
*ಸ್ಕೌಟು, ಗೈಡುಗಳು ॥ಪ॥*

*ಪ್ರವೇಶದಿಂದ ರಾಷ್ಟ್ರಪತಿವರೆಗೆ,*
*ಹಲವು ಹಂತಗಳ ಏರುತ ನಾವು,*
*ಛಲದಿ ನಾವು ಸಾಧನೆ ಗೈದು, ss*
*ನಾಡಲಿ ಬಾಳುವೆವು,*
*ನಾವು ದೇಶದಿ ಬಾಳುವೆವು,*
*ನಾವು ವಿಶ್ವದಿ ಬಾಳುವೆವು, ss ॥1॥*

*ಶತಾಬ್ಧಿಯಲ್ಲಿ ನಡೆದಿಹೆವಿಂದು,*
*ಏಕತೆಗೆಂದೂ, ಹೆಸರಾಗಿರುವಾಗ,*
*ಗಂಡು-ಹೆಣ್ಣು ಭೇಧವು ಇಲ್ಲ ss*
*ಸಮಾನರಾಗಿಹೆವು,*
*ನಾವು ಸಮಾನರಾಗಿಹೆವು ss ॥2॥*

*ಎಲ್ಲಾ ಶಾಲೆ-ಕಾಲೇಜುಗಳಲಿ,*
*ಶಿಶುಗಳಿಂದ - ವೃದ್ಧರವರೆಗೆ,*
*ಎಲ್ಲರೊ ಸೇರಿ, ಕುಣಿಕುಣಿದಾಡಿ, ss*
*ಹಾಡಿನಲಿಯುವೆವು,*
*ನಾವು ದೇಶ ಕಟ್ಟುವೆವು,*
*ನಾವು ದೇಶ ಕಟ್ಟುವೆವು ॥3॥*

*ದೇವರಿಗಾಗಿ, ದೇಶಕ್ಕಾಗಿ,*
*ಕರ್ತವ್ಯವನು ಮಾಡುವೆವು ನಾವು,*
*ಇತರಿಗೆಲ್ಲಾ ಸಹಾಯ ಮಾಡುವ ss*
*ಪ್ರತಿಜ್ಞೆ ಗೈಯುವೆವು,*
*ನಾವಿಂದು ಪ್ರತಿಜ್ಞೆ ಗೈದಿಹೆವು,*
*ನಾವೆಲ್ಲ ಪ್ರತಿಜ್ಞೆ ಮಾಡಿಹೆವು ॥4॥*

ರಚನೆ :
**ಸಂಗಯ್ಯ ಮಠಪತಿ**
ಕಾರ್ಯದರ್ಶಿ, ಎಲ್.ಎ. ಸಾತನೂರು
ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.



# ವಿಶ್ವ ಪರಿಸರ ದಿನ



ದಿನಾಂಕ 05-06-2007 ರಂದು ರಾಜ್ಯ ಸಂಸ್ಥೆ ಆಶ್ರಯದಲ್ಲಿ ವಿಶ್ವಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಬೆಳಗ್ಗೆ 9-00 ಗಂಟೆಗೆ ವಿಧಾನ ಸೌಧದ ಮುಂಭಾಗದಲ್ಲಿ ಹಸಿರು ನಿಶಾನೆ ತೋರಿಸಿ ಪಥಚಲನೆ ಉದ್ಘಾಟಿಸಿ. ಪರಿಸರ ದಿನದ ಮಹತ್ವದ ಬಗ್ಗೆ ಮಾತನಾಡಿದರು. ಪಥಸಂಚಲನವು ಕೆ.ಆರ್. ವೃತ್ತ, ಹಡ್ಸನ್ ವೃತ್ತ, ಕಸ್ತೂರಿಬಾ ರಸ್ತೆ, ಮಾರ್ಗವಾಗಿ ಬಾಲ ಭವನಕ್ಕೆ ತಲುಪಿತು.

ಶ್ರೀ ಜಿ. ಕುಮಾರ ನಾಯ್ಕ, ಭಾ.ಅ.ಸೇ. ಆಯುಕ್ತರು, ಪ್ರವಾಸೋದ್ಯಮ ಇಲಾಖೆ ಮತ್ತು ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ. ಬಾಲ ಭವನದಲ್ಲಿ ಏರ್ಪಡಿಸಿದ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಾ ಇಂದು ನಮಗೆ ಬೇಕಾಗಿರುವುದು ಪರಿಸರ ರಕ್ಷಣೆ, ಶುದ್ಧ ವಾತಾವರಣ, ಆರೋಗ್ಯಕರ ಜೀವನ ಎಂದು ನುಡಿದರು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಪ್ರಾರಂಭದಲ್ಲಿ ಮುಖ್ಯ ಅತಿಥಿಗಳನ್ನು ಸ್ವಾಗತಿಸಿದರು. ಸ್ಕೌಟಿಂಗ್ ಶತಮಾನೋತ್ಸವ ಆಚರಣೆಯಲ್ಲಿ ವಿಶ್ವ ಪರಿಸರ ಕಾಪಾಡಲು ಪ್ರತಿಯೊಂದು ಘಟಕವು 100 ಸಸಿಗಳನ್ನು ನೆಡುವ ಕಾರ್ಯಕ್ರಮ ಹಮ್ಮಿಕೊಂಡು ಪರಿಸರವನ್ನು ಕಾಪಾಡುವ ಚಿಂತನೆ ಮಾಡಿದ್ದೇವೆ ಎಂದರು.

ಖ್ಯಾತ ಪರಿಸರವಾದಿ ಮತ್ತು ರಾಜ್ಯ ಕಾರ್ಯದರ್ಶಿ ಶ್ರೀ ಸುರೇಶ್ ಹೆಬ್ಳೀಕರ್‌ರವರು ಅತಿಥಿಗಳಾಗಿ ಆಗಮಿಸಿ ಮಾತನಾಡುತ್ತಾ ಇಂದು ಅಂತರ್ಜಲದ ಮಟ್ಟ ಕಡಿಮೆಯಾಗುತ್ತಿದೆ. ಆದ್ದರಿಂದ ಕಾಡನ್ನು ಬೆಳೆಸಿ ನಾಡನ್ನು ಉಳಿಸಬೇಕಾಗಿದೆ. ವಾಯುಮಾಲಿನ್ಯ ತಡೆಗಟ್ಟಬೇಕಾಗಿದೆ. ಅಂತರ್ಜಲ ಹೆಚ್ಚಿಸಲು ಇಂಗು ಗುಂಡಿಗಳನ್ನು ನಿರ್ಮಿಸಬೇಕಾಗಿದೆ. ಪ್ಲಾಸ್ಟಿಕ್ ಬಳಕೆ ಕಡಿಮೆ ಮಾಡಿ ಒಳ್ಳೆಯ ವಾತಾವರಣ ನಿರ್ಮಿಸಬೇಕಾಗಿದೆ. ಇದರಲ್ಲಿ ಸ್ಕೌಟ್ ಗೈಡ್ಸ್‌ಗಳ ಪಾತ್ರ ಬಹಳ ಮುಖ್ಯವಾಗಿದೆ ಎಂದರು.



ರಾಜ್ಯ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಎಂ.ಜಿ. ಬೋಪಯ್ಯನವರು ಅಧ್ಯಕ್ಷ ಸ್ಥಾನ ವಹಿಸಿ ಮಕ್ಕಳಿಗೆ ಪರಿಸರದ ಬಗ್ಗೆ ಹಿತ ನುಡಿ ನುಡಿದು ಶುಭ ಕೋರಿದರು. ಸಮಾರಂಭದಲ್ಲಿ ರಾಜ್ಯ ಸಂಸ್ಥೆ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಉಪಸ್ಥಿತರಿದ್ದರು. ದಿನಾಚರಣೆ ಅಂಗವಾಗಿ ಪ್ರಬಂಧ ಸ್ಪರ್ಧೆ, ಚಿತ್ರಬಿಡಿಸಿ ಬಣ್ಣ ಹಾಕುವುದು, ಪರಿಸರ ರಕ್ಷಣೆಯಲ್ಲಿ ಸ್ಕೌಟ್ ಗೈಡ್‌ಗಳ ಪಾತ್ರದ ಬಗ್ಗೆ ಭಾಷಣ ಸ್ಪರ್ಧೆ ಏರ್ಪಡಿಸಲಾಗಿತ್ತು. ಪ್ರಥಮ, ದ್ವಿತೀಯ, ತೃತಿಯ ಸ್ಥಾನ ಪಡೆದ ಸ್ಕೌಟ್ಸ್-ಗೈಡ್ಸ್‌ಗಳಿಗೆ ರಾಜ್ಯ ಮುಖ್ಯ ಆಯುಕ್ತರು ಬಹುಮಾನ ವಿತರಿಸಿದರು.

ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ.(ಎಸ್) ಜಂಟಿ ರಾಜ್ಯ ಕಾರ್ಯದರ್ಶಿಯವರು ಎಲ್ಲರನ್ನು ವಂದಿಸಿದರು. ಶ್ರೀ ನಾರಾಯಣ ಶೆಟ್ಟಿ ರಾಜ್ಯ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಿಸಿದರು.



# ರಾಷ್ಟ್ರಪತಿ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಭಾವಿ ತರಬೇತಿ ಶಿಬಿರ

ದಿನಾಂಕ 05-05-2007 ರಿಂದ 09-05-2007ರ ವರೆಗೆ ಡಾ॥ ಆ್ಯನಿಬೆಸೆಂಟ್ ಪಾರ್ಕ್ ರಾಜ್ಯ ತರಬೇತಿ ಕೇಂದ್ರದಲ್ಲಿ ರಾಷ್ಟ್ರಪತಿ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಭಾವಿ ತರಬೇತಿ ಶಿಬಿರ ಜರುಗಿತು.

**ಉದ್ಘಾಟನೆ :** ದಿನಾಂಕ 05-05-2007 ರಂದು ಸಂಜೆ 5.00 ಘಂಟೆಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರ ಅಧ್ಯಕ್ಷತೆಯಲ್ಲಿ ರಾಜ್ಯ ವಿಧಾನ ಪರಿಷತ್ ಸದಸ್ಯರು ಮತ್ತು ರಾಜ್ಯ ಆಯುಕ್ತರು (ಗೈಡ್) ಆದ ಶ್ರೀಮತಿ ರತ್ನ ವಿ. ಕುಶ್ನೂರ್‌ರವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಶಿಬಿರವನ್ನು ಉದ್ಘಾಟಿಸಿದರು. ರಾಜಾಸ್ಥಾನ ರಾಜ್ಯದ ಎಸ್.ಓ.ಸಿ.(ಜಿ) ಮಿಸ್ ದಯಾ ಮೆಂಗಾನಿ ಡಿ.ಓ.ಸಿ.(ಜಿ) ಮಿಸ್ ಶಾಕುಂತಲ ವೈಶನೂರ್ ಅತಿಥಿಗಳಾಗಿ ಉಪಸ್ಥಿತರಿದ್ದರು. ರಾಜ್ಯ ಜಂಟಿ. ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್‌ರವರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ನಾರಾಯಣ ಶೆಟ್ಟಿ ಎಸ್.ಓ.ಸಿ.(ಎಸ್) ಶಿಬಿರದ ಉದ್ದೇಶವನ್ನು ತಿಳಿಸಿದರು.

ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್ ಪದಕ ಪಡೆಯುವಂತೆ ಶುಭಕೋರಿದರು ಸಂಸ್ಥೆಯಲ್ಲಿ ಆಗುತ್ತಿರುವ ಅಭಿವೃದ್ಧಿ ಕಾರ್ಯಗಳ ಬಗ್ಗೆ ತಿಳಿಸಿದರು.

ಶ್ರೀ ಟಿ.ಕೆ. ನಾರಾಯಣಸ್ವಾಮಿ, ಎ.ಎಲ್.ಟಿ.(ಎಸ್), ಶ್ರೀಮತಿ ಕಾರುಣ್ಯ ಭದ್ಮಜ, ಎ.ಎಲ್.ಟಿ.(ಜಿ) ಸ್ಕೌಟ್-ಗೈಡ್ ವಿಭಾಗದ ನಾಯಕರಾಗಿದ್ದರು. 216 ಸ್ಕೌಟ್ಸ್, 22 ಸ್ಕೌಟ್ ಶಿಕ್ಷಕರು, 265 ಗೈಡ್ಸ್, 18 ಗೈಡರ್ಸ್, 30 ಬೋಧಕ ವರ್ಗ ಹಾಗೂ 11 ರೋವರ್ಸ್ - 2 ರೇಂಜರ್ಸ್ ಒಟ್ಟು 565 ಜನ ಈ ಶಿಬಿರದಲ್ಲಿ ಭಾಗವಹಿಸಿದ್ದರು.

ಪ್ರತಿಜ್ಞೆ ನಿಯಮ, ಪ್ರಥಮ ಚಿಕಿತ್ಸೆ, ಅಂದಾಜು, ದಿಕ್ಸೂಚಿ, ನಕಾಶೆ, ರಾಷ್ಟ್ರಪತಿ ಪದಕ ಪಡೆಯಲು ಅರ್ಜಿಗಳನ್ನು ಭರ್ತಿಮಾಡುವ ಬಗ್ಗೆ ತಿಳಿಸಲಾಯಿತು. ಸರ್ವಧರ್ಮ ಪ್ರಾರ್ಥನೆ, ಶಿಬಿರಾಗ್ನಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ದಿನಾಂಕ 08-05-2007 ರಂದು ಸಮಾರೋಪ ಸಮಾರಂಭ ಜರುಗಿತು. ಶ್ರೀ ಎಂ. ಮದನಗೋಪಾಲ್, ಭಾ.ಆ.ಸೇ. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಕರ್ನಾಟಕ ಸರ್ಕಾರ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಮಾತನಾಡುತ್ತಾ, ಬಾಲ್ಯದಲ್ಲಿ ಸ್ಕೌಟ್ ಆಗಿದ್ದನ್ನು ನೆನಪಿಸಿಕೊಂಡರು. ಎಲ್ಲಾ ಶಾಲೆಗಳಲ್ಲೂ ಸ್ಕೌಟಿಂಗ್, ಗೈಡಿಂಗ್ ಪ್ರಾರಂಭಿಸಲು ಸಹಕಾರ ನೀಡುವುದಾಗಿ ತಿಳಿಸಿದರು. ಹಾಗೂ ಡಾ॥ ಆ್ಯನಿಬೆಸೆಂಟ್ ಪಾರ್ಕ್‌ನಲ್ಲಿ ಪ್ರತಿಭಾ ಕಾರಂಜಿ ಹಾಗೂ ಚೈತ್ರದ ಚಿಗುರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದಾಗಿ ತಿಳಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮುಖ್ಯ ಅತಿಥಿಗಳನ್ನು ಸ್ವಾಗತಿಸಿದರು ಹಾಗೂ ಸ್ಕೌಟ್ ಶತಮಾನೋತ್ಸವದ ಚಟುವಟಿಕೆಗಳ ಬಗ್ಗೆ ಸಂಸ್ಥೆ ಅಭಿವೃದ್ಧಿ ಕಾರ್ಯಗಳ ಬಗ್ಗೆ ಚಿತ್ರಣ ನೀಡಿ ಸಂಸ್ಥೆಗೆ ಸಂಪೂರ್ಣ ಸಹಾಯ ಸಹಕಾರ ನೀಡುವಂತೆ ಕೋರಿದರು. ಪ್ರೊ. ಎಂ.ಎಸ್. ಅಪ್ಪ, ಸಹಾಯಕ ರಾಜ್ಯ ಆಯುಕ್ತ ಶ್ರೀ ಎನ್. ಶ್ರೀನಿವಾಸನ್, ಮಿಸ್ ಪಿ. ಸರೋಜ, ಜಂಟಿ ರಾಜ್ಯ ಕಾರ್ಯದರ್ಶಿಗಳು ಉಪಸ್ಥಿತರಿದ್ದರು. ಶ್ರೀ ನಾರಾಯಣಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು ಕಾರ್ಯಕ್ರಮ ನಿರೂಪಿಸಿದರು.

# "100 Years of Scouting, 100 years of management"

*Bocconi University in Milam, Italy, recently hosted a special seminar on the topic "100 years of Scouting, 100 years of management. "In opening the presentation, Professor Elio Borgonovi from the University welcome guests and spoke about the similarities between an international educationl institution like Bocconi, and a Movement like World Scouting.*

*Drawing on management as an example, he explained that "it is really important to accumulate skills and to grow in competencies, but most importantly is the ability to transfer these attributes to others. And having educational methods gives you the possibility to give continuity to people's empowerment."*

*Following on with the discussion, was Eduardo Missoni, Secretary General of WOSM, who highlighted the importance of the eduction of young people, not only in the framework of school and university, but also through means of non - formal education. He addressed the issue of how managers are formed in today's society as opposed to in the past, how companies are being held more socially accountable, and how Scouting situations, make decisions, manage risk and most importantly, take responsibility."*

*Mr. Giancarlo Lombardi, President of the Filatura di Grignasco Company, and Mr. Ennio Salamon, President of Doxa, the Italian research company, also took the floor during the seminar. Both speakers made comment on the relevance of Scouting in developing leadership skills, management qualitues and positive social attitudes and how these are characteristics that are sought after by employees.*

# IF YOU PLANT

*If you plant honesty, you will reap trust.*
*If you plant goodness, you will reap friends.*
*If you plant humility, you will reap greatness.*
*If you plant perseverance, you wiil reap victory.*
*If you plant consideration, you will reap harmony.*
*If you plant hard work, you will reap success.*
*If you plant forgiveness, you will reap reconciliation.*
*If you plant openness, you will reap intimacy.*
*If you plant patience, you will reap improvements.*
*If you plant faith, you will reap miracles.*

**But :**

*If you plant dishonesty, you will reap distrust.*
*If you plant selfishness, you will reap loneliness*
*If you plant pride, you will reap destruction.*
*If you plant envy, you will reap trouble.*
*If you plant laziness, you will reap stagnation.*
*If you plant bitterness, you will reap isolation.*
*If you plant greed, you will reap loss.*
*If you plant gossip. you will reap enemies.*
*If you plant worries, you will reap wrinkles.*
*If you plant sin, you will reap guilt.*

*So be careful what you plant now, it will determine*
*what you will reap tomorrow.*

*The seeds you now scatter will make life worse or better your life*
*or the ones who will come after, Yes, someday, you will enjoy the*
*fruits, or you will pay for the choices you plant today.*

***Author Unknown***

# YOUTH

*Youth is not entirely a time of life - it is a state of mind. It is not wholly a matter of ripe cheeks, red lips or supple knees. It is a temper of the will, a quality of the imagination, a vigour of the emotions, a freshness of the deep springs of life. It means a temperamental predominance of courage over timidity, or an appetite for adventure over love of ease.*

*No body grow Sold merely by living a number of years; people grow old by deserting their ideals. Years may wrinkle the skin, but to give up interest wrinkles the soul. Worry, doubt, self-distrust, fear and despair - these are the long, long years that bow the head and turn the growing spirit back to dust. Whatever your years, there is in every being's heart, the love of wonder, the undaunted challenge of events, the unfailing childlike appetite for what next and the joy and the game of life. You are as young as yaur faith, as old as your doubt, as young as your self-confidence, as old as your fear, as young as your hope, as old, as your despair. In the central place of every heart there is a recording chamber; so long as it receives messages of beauty, cheer, and courage, so long are you young.*

*When the wires are all down, and your heart is covered with the snows of pessimism, and the ice of cynicism, then and then only are you grown old.*

***(Quoted by Ann Landers)***



***The objectives of the 100th Anniversary Celebrations are :***

- *To Celebrate 100 Years of Scouting*
- *To Demonstrate the Unity of World Scouting*
- *To Improve & Promote the Quality of Scouting*
- *To Promote World Peace Through Brotherhood & Firendship*
- *To Demonstrate the Unique Method of Scouting*
- *To Provide Enjoyable & Beneficial Experiences*
- *To Demonstrate a Commitment to Nature & the Environment*
- *To Show Concern for all Communities*

***The Centenary Celebrations is an Occasion to Communicate our Goals of Character Building, Worldwide Peace and Integration***

# *Events to mark the Centenary Celebrations*

## *For Cubs and Bulbuls*

- *Olympics and Showcase at NMDC, Doni Malai, Sandur Taluk Bellary District on 1-9-2007 to 5-9-2007.*

## *For Scouts and Guides*

- *Re-Create Brownsea Island Camp at an Island in Coastal Karnataka on 27-10-2007 to 30-20-2007.*

## *For Rovers and Rangers*

- *Rovers and Rangers Samagam at Koppal District on 3-11-2007 to 6-11-2007*

## *For Scouters and Guiders*

- *INDABA - I at Kondajji Scouts & Guides Training Centre, Kondajji, Davanagare District*

## *For Wood Badge Holders*

- *INDABA - II at Sasyachetana Scouts & Guides Training Centre, Dharwad*

## *For Training Team Members*

- *Special Centenary Meet of Trainers at Kondajji Scouts & Guides Training Centre, Kondajji, Davanagare District on 17-12-2007 to 20-12-2007*

## *For Commissioners*

- *Centenary Conference at Dr. Annie Besant Park, Doddaballapur on 2nd & 3rd August 2007*

## *For Non Warranted Ranks*

- *Centenary Meet at Dr. Annie Besant Park, Doddaballapur*

## *For Life Members*

- *Centenary Get together for Life Members at Dr. Annie Besant Park, Doddaballapur August 2008*

# *Congratulations.....*

*Ten Senior Scout-Guide Leaders of the Movement of our State are receining the Distinguished National Awards from His Excellency, Bharathatna Dr. A.P.J. Abdul Kalamji at Ashoka Hall of Rashtrapathi Bhawan, New Delhi on 11 July 07, for the Meritorious and Distinguished Services rendered by them to the Movement. Each one of them have done their best to spread the Message of the Movement to more number of Youth in their long Association of the Movement, which runs into Decades.*

*The Details of the Awardees and Awards to be presented to them are as follows :*

1. *Sri. M.M. Londe, District Chief Commissioner, Dharwad - Silver Elephant*
2. *Sri. Chinnaswamy Reddy, Former State Secretary - Silver Elephant*
3. *Miss. Ravi Wesley, Headquarters Commissioner (G) Trg. - Bar to Silver Star*
4. *Mrs. Geetha Nataraj, Joint State Secretary (G) - Bar to Silver Star*
5. *Lt. Col. V.C. Haridev Katkar, Former District Commissioners (S), Bangalore North D.A. - Silver Star*
6. *Sri. R. Venkanna, District Chief Commissioner, Bellary - Silver Star*
7. *Sri. R. Chandrasekharan, Former Headquarters Commissioner (Publications) - Silver Star*
8. *Miss. Shanta Guiriyanna, District Training Commissioner (G) Mysore City - Silver Star*
9. *Sri. S.S. Nimbal, District Secreatry, Bijapur - Silver Star*
10. *Mrs. Hema Vijayakumar, Leader Trainer (Cubs) - Silver Star*

*The State Headquarters places on record with Gratitude the Support extended by these Awardees to the Movement for Seveal decades and Converys its Hearty Congrafulations on the Distinction to be Conferred on them by H.E. Rashtrapathji at New Delhi next month and wishes each one of them a very Happy and Eventful Scouting and Guiding for Many more years to come.*

*State Secretary*

# *Preparations for the Rashtrapati Scout & Guides / Rovers & Rangers .................. NHQ*

1. *A unit must have charter number (Registration Number) and up to date renewal.*

2. *A unit leader must be minimum advanced - trained unit leader who have valid warrant.*

3. *From one unit maximum 25% of the Total Strength of the unit i.e. 8 or 6 Scouts / Guides, Rovers / Rangers as the case may be come eligibe to the level of Rashtrapati Scout / Guide, Rover / Ranger in a year.*

4. *A unit leader producing Rashtrapati Scouts / Guides must also work for Prime Minister Shield / Upa-Rashtrapati Rover / Ranger Award Scheme. We are linking the 36 Hours susstained service provision - in the syllabus relevant to the provisions of community service project and Community Development Project in Prime Minister Shield and Upa-Rashtrapati Award Scheme.*

5. *All Proficiency Badges must be tested by the badge committee at District level and details be given in the information sheet. Information sheet will have to be completed and attached with the registration application forms.*

6. *Tritiya Sopan testing / Praveen testing Should be conducted at District level.*

7. *Rajiya Puraskar testing / Nipun testing camp must be conducted at the State level and qualified Scouts / Guides, Rovers / Rangers be awarded Rajya Puraskar / Nipum Award Certificate by the respective states.*

8. *Application forms for registration of the Rashtrapati Award certificates have been revised as per revised syllabus. All applications will be accepted in the revised forms, which are available for sale in the Supply Service Deptt. of National Headquarters.*

9. *Skills up to the Tritiya Sopan and Rajya Puraskar / Praveen, Nipun Test will also be tested in the Rashtrapati Award Testing Camps.*

10. *Rovers / Rangers of the same unit must select different subject on 'World Affairs' & submit a report to crew council.*

11. *All Rashtrapati Award testing camps will be held at Regional level. Name of the Training Centers to organise Regional level Testing Camps will be informed separately. No Testing Camp will be conducted in the building, whether this is a building of a Training Centre or a School Building. As far as possible, the Rashtrapati Testing Camps in open ground will be held under canvas.*
12. *Last date for receiving application at National Headquarters is fixed as 30th June 2007.*
13. *As a Special case for receiving application at NHQ, last date may be upto 31st July 2007 subject to the exemption granted by the Director for valid reasons.*
14. *The date of completion of Rajya Puraskar Testing Camp shall be treated the day when the state after conduction state level re-testing camp declares the candidate qualified.*
15. *Districts issue Proficiency Badges on the basis of Certificates issued, by the Badge Committee.*



## • GONE HOME •

*We record with deep regret the Sad and Sudden Demise of Smt. C. Jayaratna, former Joint Secretary, Bharat Scouts & Guides, Bangalore South District Association and former Member of the State Executive Committee of Bharat Scouts & Guides, Karnataka who passed away on 14th June 2007 at her residence at Bangalore.*

*She served the Movement as a Guider for nearly four decades and worked as Joint Secretary of Bangalore South District Association with Commitment and she actively participated in the 10th National Jamboree held at Palace Grounds, Bangalore during 1985. She worked in the Education Department and retired as Head Mistress.*

*We Pray God Almighty to give necessary Courage and Strength to her Husband and other Members of the Family to bear this Irreparable Loss.*

*May her soul rest in peace*




## ಉತ್ತರ ಕನ್ನಡ ಜಿಲ್ಲೆ

ದಿನಾಂಕ 19-04-2007 ರಿಂದ 28-04-2007ರ ವರೆಗೆ ಶಿರಸಿಯ ಎ.ಪಿ.ಎಂ.ಸಿ. ಯಾರ್ಡದಲ್ಲಿಯ ರೈತಭವನದಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ದ ಬೇಸಿಕ್ ತರಬೇತಿಯನ್ನು ಹಮ್ಮಿಕೊಳ್ಳಲಾಗಿತ್ತು. ಈ ತರಬೇತಿಗೆ ಸಿದ್ದಾಪುರ, ಶಿರಸಿ, ಮುಂಡಗೋಡದಿಂದ ಶಿಕ್ಷಕರು ಆಗಮಿಸಿದ್ದರು.

ಈ ತರಬೇತಿ ಸಂದರ್ಭದಲ್ಲಿ ಶಿರಸಿ ತಾಲೂಕಾ ಕಾರ್ಯದರ್ಶಿ ಶ್ರೀ ವಿ.ಎಚ್. ಭಟ್ಕಳ ಇವರು ಪತ್ರಿಕಾಗೋಷ್ಠಿ ಏರ್ಪಡಿಸಿ ತರಬೇತಿ ಪಡೆದ ಮಕ್ಕಳಿಗೆ ಈ ತರಬೇತಿಯಿಂದ ಆಗುವ ಲಾಭವನ್ನು ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಬೆಳವಣಿಗೆಯ ಬಗ್ಗೆ ಪಾಲಕರಿಗೆ ಮನವರಿಕೆಯಾಗುವಂತೆ ತಿಳುವಳಿಕೆ ನೀಡಲಾಯಿತು.

ಈ ಸಂದರ್ಭದಲ್ಲಿ ವಾಣಿಜ್ಯ ಮತ್ತು ತೆರಿಗೆ ಆಯುಕ್ತ ಸೂರಜರಾಣಿ ಪ್ರಭು, ಬೆಂಗಳೂರಿನ ಶ್ರೀಯುತ ಮಾಧವಸಿಂಗ್, ರಾಜ್ಯ ತರಬೇತಿ ಆಯುಕ್ತರು, ದಾವಣಗೆರೆಯ ಜಿಲ್ಲಾ ತರಬೇತಿ ಆಯುಕ್ತೆಯಾದ ಶ್ರೀಮತಿ ಶಶಿಕಲಾ ಎ.ಎಲ್.ಟಿ. (ಜಿ), ಉತ್ತರ ಕನ್ನಡ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಡಿ. ಫರ್ನಾಂಡಿಸ್, ಎಲ್.ಟಿ. (ಸ್ಕೌ) ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀಮತಿ ಭಾರತಿ ಡಯಾಸ್, ತಾಲೂಕಾ ಕಾರ್ಯದರ್ಶಿಗಳಾದ ಶ್ರೀ ವಿ.ಎಚ್. ಭಟ್ಕಳ, ಸಹ ಕಾರ್ಯದರ್ಶಿ ಶ್ರೀ ಕರಣ ಫರ್ನಾಂಡಿಸ್, ಶ್ರೀ ಸತ್ಯನಾರಾಯಣ ಹೆಗಡೆ ಮತ್ತು ಗೈಡ್ ಕ್ಯಾಪ್ಟನ್, ವನಿತಾ ಶೇಟ್. ಶ್ರೀ ಎಸ್.ಸಿ. ಕಲವೀರಪ್ಪಾ, ಸಮಾಜ ಸೇವಾ ಕಾರ್ಯಕರ್ತರು ಮತ್ತು ಶಾಂತಾ ನಾಯಕ ಟಿ.ಓ.ಸಿ.ಯವರು ಉಪಸ್ಥಿತರಿದ್ದರು.

## ಬಳ್ಳಾರಿ ಜಿಲ್ಲೆ

ದಿನಾಂಕ 09-06-2007 ರಂದು ಬಳ್ಳಾರಿ ತಾಲ್ಲೂಕಿನ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಸ್ಕೌಟ್ಸ್ ಮತ್ತು ಗೈಡ್ಸ್ ಭವನದಲ್ಲಿ ನಡೆಯಿತು. ಅಂದು 26 ಸ್ಕೌಟರ್-ಗೈಡರ್‌ಗಳು ಸಮಾವೇಶದಲ್ಲಿ ಭಾಗವಹಿಸಿದರು. ಶ್ರೀ ಚಿನ್ನಸ್ವಾಮಿ ರೆಡ್ಡಿ ಜಿಲ್ಲಾ ಕಾರ್ಯದರ್ಶಿ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಸೇವಾ ಪ್ರವೃತ್ತಿಯ ಗುಣಗಳನ್ನು ಅವಳಡಿಸಿಕೊಳ್ಳುವಂತೆ ತರಬೇತಿ ನೀಡಬೇಕೆಂದು ತಿಳಿಸಿದರು. ಶ್ರೀ ಓಮೇಶ್ವರಯ್ಯ ಜಿಲ್ಲಾ ಸಂಘಟಕರು ಸಮಾವೇಶದ ನಾಯಕರಾಗಿದ್ದರು.

ದಿನಾಂಕ 16-06-2007 ರಂದು ಹೊಸಪೇಟೆ ತಾಲ್ಲೂಕಿನ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಶ್ರೀ ವಿವೇಕಾನಂದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಹೊಸಪೇಟೆಯಲ್ಲಿ ನಡೆಯಿತು, ಶ್ರೀ ಆನಂದಮೂರ್ತಿ ಉಪನ್ಯಾಸಕರು ಹಾಗೂ ಸ್ಕೌಟ್ ಮಾಸ್ಟರ್ ಸಮಾವೇಶದ ನಾಯಕರಾಗಿದ್ದರು. 35 ಸ್ಕೌಟರ್-ಗೈಡರ್‌ಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.

**ರಾಜ್ಯ ಪುರಸ್ಕಾರ ಸ್ಕೌಟ್ ಗೈಡ್‌ಗಳಿಗೆ ತರಬೇತಿ ಹಾಗೂ ಪರೀಕ್ಷಾ ಶಿಬಿರ :** ದಿನಾಂಕ 10 ರಿಂದ 13 ಜೂನ್ 2007ರ ವರೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ಬಳ್ಳಾರಿಯಲ್ಲಿ ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕಿನ ರಾಜ್ಯ ಪುರಸ್ಕಾರ ಪದಕಕ್ಕೆ ನೋಂದಾಯಿಸಿದ ಸ್ಕೌಟ್ಸ್ ಗೈಡ್ಸ್‌ಗಳಿಗೆ ಪೂರ್ವ ಸಿದ್ಧತಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ 134 ಸ್ಕೌಟ್ ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದ ನಾಯಕರಾಗಿ ಶ್ರೀ ಚಿನ್ನಸ್ವಾಮಿ ರೆಡ್ಡಿ, ಎಲ್.ಟಿ.(ಎಸ್) ಕಾರ್ಯನಿರ್ವಹಿಸಿದ್ದರು. ಶ್ರೀ ಓಮೇಶ್ವರಯ್ಯ, ನಾಗರಾಜ್

ಇನ್ನಿತರ ಸ್ಕೌಟರ್ ಗೈಡರ್‌ಗಳು ಸಹಾಯಕರಾಗಿ ಕಾರ್ಯನಿರ್ವಹಿಸಿದರು.

## ಶಿವಮೊಗ್ಗ ಜಿಲ್ಲೆ

ದಿನಾಂಕ : 14.06.2007 ರಂದು ನಗರದ ವಾಸವಿ ವಿದ್ಯಾಲಯದಲ್ಲಿ 2007-08ನೇ ಸಾಲಿನ ಸ್ಕೌಟ್ ದಳ ಮತ್ತು ಗೈಡ್ಸ್ ಕಂಪನಿಗಳ ಉದ್ಘಾಟನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಪ್ರೊ. ಎ.ಎಸ್. ಚಂದ್ರಶೇಖರ್, ಜಿಲ್ಲಾ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌ) ಶ್ರೀ ಟಿವಿ. ಮಂದುನಾಥಾಚಾರ್ ಎ.ಎಲ್.ಟಿ. (ಎಸ್) ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಮತ್ತು ವಾಸವಿ ವಿದ್ಯಾಲಯದ ಕಾರ್ಯದರ್ಶಿ ಶ್ರೀ ಎಸ್.ಕೆ. ಶೇಷಾಚಲರವರು ದೀಪ ಬೆಳಗಿಸುವ ಮೂಲಕ 2007-08ನೇ ಸಾಲಿನ ಸ್ಕೌಟ್‌ಗಳ ಮತ್ತು ಗೈಡ್ ಕಂಪನಿಗಳ ಉದ್ಘಾಟನೆಯನ್ನು ಮಾಡಿದರು. ನಂತರ ಪ್ರೊ. ಎ.ಎಸ್. ಚಂದ್ರಶೇಖರ್ ಜಿಲ್ಲಾ ಆಯುಕ್ತರು (ಸ್ಕೌಟ್)ರವರು ಬೇಡನ್ ಪೊವೆಲ್‌ರವರ ಜೀವನ ಚರಿತ್ರೆಯ ಬಗ್ಗೆ ಸ್ಕೌಟಿಂಗ್ ಗೈಡಿಂಗ್ ಮಹತ್ವದ ಬಗ್ಗೆ ಮಕ್ಕಳಿಗೆ ತಿಳಿಸಿದರು.

ಶ್ರೀ ಟಿ.ಎ. ಮಂಜುನಾಥಾಚಾರ್, ಸ್ಕೌಟಿಂಗ್ - ಗೈಡಿಂಗ್‌ನ ಪ್ರಗತಿ ಪರ ಚಟುವಟಿಕೆಗಳು, ರಾಜ್ಯ ಪುರಸ್ಕಾರ ರಾಷ್ಟ್ರಪತಿ ಸ್ಕೌಟ್-ಗೈಡ್‌ಗಳ ಅರ್ಜಿ ತುಂಬುವ ಬಗ್ಗೆ, ಸ್ಕೌಟಿಂಗ್ ಶತಮಾನೋತ್ಸವವನ್ನು ಶಾಲೆ ಮಟ್ಟದಲ್ಲಿ ಹೇಗೆ ಆಚರಿಸಬೇಕೆಂಬುದನ್ನು ತಿಳಿಸಿದರು. ವಾಸವಿ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್.ಕೆ. ಶೇಷಾಚಲರವರು. ಸಮಾಜ ಸೇವೆ ಸ್ಕೌಟಿಂಗ್ ಬಗ್ಗೆ ತಿಳಿಸಿದರು. ಮೊದಲಿಗೆ ದಿನೇಶ್ ಜೈನ್ ಸರ್ವರನ್ನೂ ಸ್ವಾಗತಿಸಿದರು. ಕೊನೆಯಲ್ಲಿ ಕುಮಾರಿ ದೀಪ, ಗೈಡ್ ವಂದನಾರ್ಪಣೆಯೊಂದಿಗೆ ಸಮಾರಂಭದ ಮುಕ್ತಾಯವಾಯಿತು. ಸ್ಕೌಟ್ ಮಾಸ್ಟರ್, ಶ್ರೀ ನೂರ್ ಅಹಮದ್‌ರವರು ಬಹಳ ಅಚ್ಚುಕಟ್ಟಾಗಿ ಈ ಸಮಾರಂಭವನ್ನು ಏರ್ಪಡಿಸಿದ್ದರು.

ವಿಶ್ವ ಸ್ಕೌಟ್ ಶತಮಾನೋತ್ಸವವನ್ನು ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಆಚರಿಸುವ ಕುರಿತು ಮಾನ್ಯ ಶ್ರೀ ಟಿ.ಕೆ. ಅನಿಲ್‌ಕುಮಾರ್, ಭಾ.ಆ.ಸೇ. ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಜಿಲ್ಲಾ ಸಂಸ್ಥೆ ಇವರ ಅಧ್ಯಕ್ಷತೆಯಲ್ಲಿ ಜಿಲ್ಲಾಧಿಕಾರಿಗಳ ಸಭಾಂಗಣದಲ್ಲಿ ದಿನಾಂಕ 4-6-2007 ಸಂಜೆ 6 ಗಂಟೆಗೆ ಜಿಲ್ಲಾ ಮಟ್ಟದ ವಿವಿಧ ಇಲಾಖೆಗಳ ಅಧಿಕಾರಿಗಳು, ಸಾರ್ವಜನಿಕರು, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳ ವಿವಿಧ ಸಂಘ ಸಂಸ್ಥೆಗಳ ಪ್ರತಿನಿಧಿಗಳ ಸಭೆ ನಡೆಸಲಾಯಿತು.

ಶ್ರೀ ಎಂ.ಜಿ. ಶಿವಕುಮಾರ್ ಎ.ಎಲ್.ಟಿ.(ಎಸ್), ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್)ರವರು, ರಾಜ್ಯ ಸಂಸ್ಥೆಯ ಯೋಜನೆಯ ಪ್ರಕಾರ ಜಿಲ್ಲಾ ಸಂಸ್ಥೆಯ ಪ್ರಚಾರ, ಚಟುವಟಿಕೆಗಳು ಸೇವಾ ಕಾರ್ಯ ಮತ್ತು ದಾಖಲೆಗಳ ಬಗ್ಗೆ ಸಭೆಯಲ್ಲಿ ಸವಿಸ್ತಾರವಾಗಿ ತಿಳಿಸಿದರು.

ಶ್ರೀ ಟಿ.ಎ. ಮಂಜುನಾಥಾಚಾರ್ ಎ.ಎಲ್.ಟಿ.ಯ(ಎಸ್) ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ರವರು ದಿನಾಂಕ 1.6.2007 ರಿಂದ 31.1.2008ರ ವರೆಗೆ ಪ್ರತೀ ತಿಂಗಳು ಜಿಲ್ಲಾ ಸಂಸ್ಥೆಯು ಹಮ್ಮಿಕೊಂಡಿರುವ 17 ಕಾರ್ಯಕ್ರಮಗಳ ಬಗ್ಗೆ ತಿಳಿಸಿದರು.

ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು ಹಾಗೂ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಡಾ॥ ಪಿ. ಬೋರೇಗೌಡರು ಈ ಸಭೆಯಲ್ಲಿ ಮಂಡಿಸಿದ ಎಲ್ಲಾ ಕಾರ್ಯಕ್ರಮಗಳಿಗೆ ಹೆಚ್ಚಿನ ಆರ್ಥಿಕ ಸಹಾಯ ನೀಡಲು ನಮ್ಮ ಅಧೀನದಲ್ಲಿ ಬರುವ ಎಲ್ಲಾ ಇಲಾಖೆಗಳ ಸಹಾಯದಿಂದ ಶತಮಾನೋತ್ಸವವನ್ನು ಯಶಸ್ವಿಗೊಳಿಸಲು ಭರವಸೆ ನೀಡಿದರು.

ಪ್ರೊ. ಎ.ಎಸ್. ಚಂದ್ರಶೇಖರ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್)ರವರು ಗ್ರಾಮೀಣ ಭಾಗದ ಮಕ್ಕಳಿಗೆ ಸಮವಸ್ತ್ರ ಪೂರೈಕೆಯ ಬಗ್ಗೆ ಡಾ॥ ಪಿ. ಬೋರೇಗೌಡ,

ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಇವರನ್ನು ವಿನಂತಿಸಿದರು.

ಶ್ರೀ ದೇವದಾಸ್ ನಾಯಕ್‌ರವರು ಸಮಾಜ ಕಲ್ಯಾಣ ಇಲಾಖೆಯ ಅಧೀನದಲ್ಲಿನ ಎಲ್ಲಾ ಹಾಸ್ಟೆಲ್‌ಗಳಲ್ಲೂ ಸ್ಕೌಟ್ ದಳಗಳನ್ನು ಪ್ರಾರಂಭಿಸಲು ವಿನಂತಿಸಿದರು.

ಶ್ರೀ ಎಸ್.ಎಲ್. ಚಲ್ವಾಣ್ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಇವರು ಜಿಲ್ಲೆಯ ಪ್ರತಿ ಶಾಲೆಗಳಲ್ಲಿ ಸ್ಕೌಟಿಂಗ್ ವ್ಯಾಪಕವಾಗಿ ಹಬ್ಬಲು ಹಾಗೂ ಶಿಕ್ಷಕ-ಶಿಕ್ಷಕಿಯರ ತರಬೇತಿ ಶಿಬಿರಗಳನ್ನು ನಡೆಸಲು ಶಿಕ್ಷಕರನ್ನು ನಿಯೋಜಿಸಲಾಗುವುದೆಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಟಿ.ಕೆ. ಅನಿಲ್ ಕುಮಾರ್, ಜಿಲ್ಲಾಧಿಕಾರಿಗಳು ಅಧ್ಯಕ್ಷೀಯ ಭಾಷಣದಲ್ಲಿ ಎಲ್ಲಾ ಇಲಾಖೆಗಳು ಈ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮತ್ತು ಆರ್ಥಿಕ ಸಹಾಯ ನೀಡುವಂತೆಯೂ ಹಾಗೂ ಈ ಚಟುವಟಿಕೆಗಳಿಗೆ ಆರ್ಥಿಕ ಸಹಾಯ ನೀಡಲು ಈಗಾಗಲೇ ಅನೇಕ ಇಲಾಖೆಗಳು ಕಾರ್ಯಕ್ರಮ -ಗಳನ್ನು ನಡೆಸುತ್ತೇವೆ ಹಾಗೂ ಆ ಹಣವನ್ನು ಸ್ಕೌಟ್ - ಗೈಡ್ ಚಟುವಟಿಕೆಗಳಿಗೆ ನೀಡಲು ಸೂಚಿಸಿದರು.

### ಶಿವಮೊಗ್ಗ ನಗರದ ಕಬ್ ಮಾಸ್ಟರ್ : ಫ್ಲಾಕ್ ಲೀಡರ್ : ಸ್ಕೌಟ್ ಮಾಸ್ಟರ್ : ಗೈಡ್ ಕ್ಯಾಪ್ಟನ್‌ಗಳ ಸಭೆ :

ದಿನಾಂಕ 16-6-2007 ರಂದು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ ಜಿಲ್ಲಾ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ಶಿವಮೊಗ್ಗ ನಗರದ ಕಬ್ ಮಾಸ್ಟರ್, ಫ್ಲಾಕ್ ಲೀಡರ್ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳ ಸಭೆಯನ್ನು ಕರೆಯಲಾಗಿತ್ತು.

ವಿಶ್ವ ಸ್ಕೌಟ್ ಶತಮಾನೋತ್ಸವದ ಬಗ್ಗೆ ದಿನಾಂಕ 4-6-2007 ರಂದು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆಯು ನಡೆದ ಬಗ್ಗ ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ನಗರದ ಪ್ರತಿ ಶಾಲೆಗಳಿಂದ ಸಂಜೆ 4-30 ರಿಂದ 5-30ರ ವರೆಗೆ ಜಿಲ್ಲಾ ಸ್ಕೌಟ್ ಭವನಕ್ಕೆ ಬಾಲಕ-ಬಾಲಕಿಯರನ್ನು ಕರೆದುಕೊಂಡು ಬರಲು ಸ್ಕೌಟರ್ಸ್-ಗೈಡರ್ಸ್‌ಗಳಲ್ಲಿ ವಿನಂತಿಸಿದರು. ವಿಶ್ವ ಸ್ಕೌಟ್ ಶತಮಾನೋತ್ಸವದ ಅಂಗವಾಗಿ ನಗದರದ ಎಲ್ಲಾ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳನ್ನು ಪ್ರತಿದಿನ 2-3 ದಳಗಳನ್ನು ಸೇರಿಸಲು ಶ್ರೀ ಟಿ.ಎ. ಮಂಜುನಾಥಾಚಾರ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು, ಶ್ರೀ ಎಂ.ಜಿ.

ಶಿವಕುಮಾರ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀ ವೈ.ಆರ್. ವೀರೇಶಪ್ಪ, ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ ಶಿವಮೊಗ್ಗ ಇವರಿಗ ವಹಿಸಲಾಯಿತು.

## ಚಿತ್ರದುರ್ಗ ಜಿಲ್ಲೆ

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹುಲ್ಲೇಹಾಳ್ ಸ್ಕೌಟ್ ಟ್ರೂಪ್‌ನ ವತಿಯಿಂದ ವಿಶ್ವ ಪರಿಸರ ದಿನಾಚರಣೆಯ ಅಂಗವಾಗಿ ಶಾಲಾವನ ಮಹೋತ್ಸವ ಹಾಗೂ ಪರಿಸರ ಜಾಗೃತಿ ಕಾರ್ಯಕ್ರಮವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹುಲ್ಲೇಹಾಳ್‌ನಲ್ಲಿ ಆಯೋಜಿಸಲಾಗಿತ್ತು.

ಬಸ್ತಿಹಳ್ಳಿಯ ಐ.ಎಫ್.ಎಸ್. ಪದವಿ ಪುರಸ್ಕೃತರಾದ ಶ್ರೀ ಬಿ.ಎನ್.ಎನ್. ಮೂರ್ತಿಯವರು ಶಾಲಾವರಣದಲ್ಲಿ ಸಸಿಯನ್ನು ನಡೆವುದರ ಮೂಲಕ ಶಾಲಾವನ ಮಹೋತ್ಸವ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಇದೇ ಸಂದರ್ಭದಲ್ಲಿ ಶಾಲಾ ವನಮೋಹತ್ಸವ ಕಾರ್ಯಕ್ರಮಕ್ಕೆ ಸುಮಾರು ವಿವಿಧ ರೀತಿಯ 200 ಸಸಿಗಳನ್ನು ಉದಾರವಾಗಿ ನೀಡಿದರು.

ಸ್ಕೌಟ್ ಮಾಸ್ಟರ್ ಸಿ.ಎಸ್. ಮಹೇಶ, ಹೆಚ್.ಡಬ್ಲ್ಯೂ.ಬಿ. ಮಾತನಾಡಿ ಸ್ಕೌಟ್ ನಿಯಮವಾದ ಸ್ಕೌಟ್ ಪ್ರಾಣಿ ಮಿತ್ರನು ಹಾಗೂ ಪರಿಸರ (ಪ್ರಕೃತಿ) ಪ್ರೇಮಿ ಎಂಬುವುದನ್ನು ವಿವರಿಸುತ್ತಾ ಪರಿಸರದ ಮಹತ್ವ ಹಾಗೂ ಪರಿಸರ ಮಾಲಿನ್ಯವನ್ನು ಕುರಿತು ವಿದ್ಯಾರ್ಥಿಗಳಿಗೆ ತಿಳುವಳಿಕೆ ನೀಡಿದರು.

ಶಾಲಾವರಣದಲ್ಲಿ ಸ್ಕೌಟ್ ಮಾಸ್ಟರ್ ಸಿ.ಎಸ್. ಮಹೇಶ್ ಹಾಗೂ ಶಿಕ್ಷಕ ಬಿ.ಕೆ. ನಾಗಪ್ಪ ಅವರ ನೇತೃತ್ವದಲ್ಲಿ 200ಕ್ಕೂ ಹೆಚ್ಚು ಸಸಿಗಳನ್ನು ನೆಡಲಾಯಿತು.

ವೇದಿಕೆಯಲ್ಲಿ ಬಸ್ತಿಹಳ್ಳಿ ಹಿರಿಯರಾದ ಶರಣಯ್ಯ, ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಐ.ಸಿ. ಶಿವಾನಂದಯ್ಯರವರು ಅಧ್ಯಕ್ಷತೆ ವಹಿಸಿದ್ದರು. ಶಿಕ್ಷಣ ಅಣ್ಣಪ್ಪ ನಿರೂಪಿಸಿದರು. ದೈಹಿಕ ಶಿಕ್ಷಕ ಬಿ.ಸಿ. ವಸಂತರೆಡ್ಡಿ ವಂದಿಸಿದರು.

- ಧರ್ಮದಿಂದ ಸಂಪತ್ತು, ಸುಖ ದೊರೆಯುತ್ತದೆ. ಎಲ್ಲ ಇಷ್ಟಾರ್ಥಗಳೂ ಧರ್ಮದಿಂದಲೇ ಲಭಿಸುತ್ತವೆ. ಆದ್ದರಿಂದ ಪ್ರಪಂಚದಲ್ಲಿ ಧರ್ಮವೇ ಶ್ರೇಷ್ಠವಾದುದು.

  – ವಾಲ್ಮೀಕಿ ರಾಮಾಯಣ

- ರಟ್ಟೆ ಮುರಿದು ಸಂಪಾದಿಸಿದ ರೊಟ್ಟಿಯ ರುಚಿ, ದೇವಲೋಕದ ಅಮೃತಕ್ಕೂ ಮಿಗಿಲು.

  – ಟಿ.ಪಿ. ಕೈಲಾಸಂ

- ಚಂದನವಾಗಲಿ, ಜಾಜಿಯಾಗಲಿ, ಕಮಲದ ಹೂ ಆಗಲಿ - ಇವುಗಳೆಲ್ಲದರ ವಾಸನೆಗಿಂತ ಮನುಷ್ಯನ ನಡತೆಯ ಪರಿಮಳವೇ ಹೆಚ್ಚು.

  – ಬುದ್ಧ

- ಯಾರು ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಾರೋ, ಅವರಿಗೆ ದೇವರೂ ಸಹಾಯ ಮಾಡುತ್ತಾನೆ.

  – ಎಸ್. ರಾಧಾಕೃಷ್ಣನ್

## ಪರಿಸರ ಗೀತೆ

ಪರಿಸರ ಉಳಿಸೋಣ
ನಾವು ಹಸಿರನು ಬೆಳೆಸೋಣ
ಹಸಿರೇ ನಮ್ಮಯ ಉಸಿರು ಎನ್ನುತ
ನಗುತಲಿ ಬಾಳೋಣ ॥

ಪಾಪವ ತೊಳೆವಳು ಶ್ರೀ ಗಂಗೆ
ಜೀವಕ್ಕಾಗಿ ಶ್ರೀ ತುಂಗೆ
ಶುದ್ಧ ಜಲವನು ಕುಡಿಯಲು ನಾವು
ಸಿದ್ಧರಾಗೋಣ ॥೧॥

ಉಸಿರಿನಿಂದಲೇ ನಮ್ಮ ಬಾಳು
ಉಸಿರಿನಿಂದಲೇ ನಮ್ಮ ಜೀವ
ಶುದ್ಧ ವಾಯುವನ್ನು ಪಡೆಯಲು
ಬದ್ಧರಾಗೋಣ ॥೨॥

ಶಾಂತಿಯತ್ತ ಸಾಗೋಣ
ಶಾಂತಿಗಾಗಿ ಶ್ರಮಿಸೋಣ
ಸ್ಕೌಟ್, ಗೈಡ್ ಮಕ್ಕಳು ನಾವು
ವಿಶ್ವ ಶಾಂತಿಯ ಬಯಸೋಣ ॥೩॥

ರಚನೆ : ನಿರ್ಮಲಾ ಎಂ. ಕಲಶೆಟ್ಟಿ
ರಾಜ್ಯ ಸಹಾಯಕ ಸಂಘಟನಾ ಆಯುಕ್ತರು (ಗೈಡ್ಸ್)
ಬೆಂಗಳೂರು

## ರಾಜ್ಯ ಗೈಡ್ಸ್ ಆಯುಕ್ತರ ನೇಮಕ



ಶ್ರೀಮತಿ ರತ್ನ ವಿ. ಕುಶನೂರ್, ಮಾನ್ಯ ವಿಧಾನ ಪರಿಷತ್ ಸದಸ್ಯರು ಹಾಗು ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್) ಗುಲ್ಬರ್ಗ ವಿಭಾಗ ಇವರನ್ನು ರಾಜ್ಯ ಆಯುಕ್ತರು (ಗೈಡ್ಸ್) ಎಂದು ಆಗಿ ರಾಜ್ಯ ಮುಖ್ಯ ಆಯುಕ್ತರು ನೇಮಕ ಮಾಡಿರುತ್ತಾರೆ.

ದಿನಾಂಕ ಮೇ ೩ ರಿಂದ ಶ್ರೀಮತಿ ರತ್ನ ವಿ. ಕುಶನೂರ್ ಅವರು ರಾಜ್ಯ ಗೈಡ್ಸ್ ಆಯುಕ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ರಾಜ್ಯ ಕಾರ್ಯದರ್ಶಿ



## How to Spell "BADEN POWELL"??

*Man Nation Maiden*
*Please call it Baden*
*Further for Powell*
*Rhyme it with Noel*



Sri Vasanth G Guddodagi, Joint Director, Youth Services & Sports was felicitated on the eve of his retirement at SHQ, Bangalore



Sri T.K. Anil Kumar, IAS, Deputy Commissioner, Shimoga chaired the meeting of the Centenary Celebration Committee at Shimoga.





Scouts Planting Tree saplings on the occassion of The World Environment Day



Scout of Bindhu Open Unit of Baindur planting Tree saplings.



Bhagath Singh Scout Troop was Inaguarated at the Govt. High School ar Halasoor, Bangalore(R.)







**A CENTURY OF SCOUTING 2007**




27th July to 8th August 2007

**100** **2007**

**A Hundred years of Promise**
**Scouting will Celebrate its Centenary in 2007**

*The Anniversary should be an occasion :*

To demonstrate the unity of World Scouting /Guiding.
To improve and promote the quality of Scouting/Guiding.
To promote a more peaceful World.
To demonstrate a commitment to nature and the environment.
To show concern for all Communities.

YOUR SUPPORT WILL HELP US TO REACH OUR GOAL



Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: **WPP-87** of SSP, BANGALORE WEST
Posted at: Bangalore City H.P.O. on 06-07-2007




**If not delivered please return to :**

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227.

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.